

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1988 |
| ಸದಸ್ಯರ ಹೆಸರು | ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 24.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಂವಿಧಾನ 371–ಜೆ ಅಡಿಯಲ್ಲಿ ಸುಳ್ಳು ದಾಖಲೆ ನೀಡಿ ಪಡೆದಂತಹ ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಇರುವ ಸಕ್ಷಮ ಪ್ರಾಧಿಕಾರ ಯಾರು; | ಸಂವಿಧಾನ 371–ಜೆ ಅಡಿಯಲ್ಲಿ ಸುಳ್ಳು ದಾಖಲೆ ನೀಡಿ ಪಡೆದಂತಹ ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಕಂದಾಯ ಉಪವಿಭಾಗದ ಸಹಾಯಕ ಆಯುಕ್ತರು, ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ. |
| ಆ) | ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಸಹಾಯಕ ಆಯುಕ್ತರು ಮತ್ತು ಜಿಲ್ಲಾಧಿಕಾರಿಗಳು ವಿಳಂಬ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದುಪಡಿಸಲು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಮೀಸಲಾತಿ)ಆದೇಶ 2013ರ ನಿಯಮ 7(2)ರಡಿಯಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ. ಸದರಿ ನಿಯಮಗಳನ್ವಯ ಸುಳ್ಳು ಅರ್ಹತಾ ಪ್ರಮಾಣ ಪತ್ರವನ್ನು ರದ್ದು ಪಡಿಸಲು ಸಹಾಯಕ ಆಯುಕ್ತರು ಮತ್ತು ಜಿಲ್ಲಾಧಿಕಾರಿಗಳು ಕ್ರಮವಹಿಸುತ್ತಿದ್ದು, ವಿಳಂಬ ಆಗಿರುವುದಿಲ್ಲ. |
| ಇ) | ಸಂವಿಧಾನ 371–ಜೆ ಕಾನೂನು ಅಡಿಯಲ್ಲಿ ಅರ್ಹತಾ ಪ್ರಮಾಣ ಪತ್ರ ಅನುಬಂಧ–1 ಮತ್ತು ಅನುಬಂಧ–ಬಿಯಲ್ಲಿ ಎಷ್ಟು ಸುಳ್ಳು ಪ್ರಮಾಣ ಪತ್ರಗಳನ್ನು ವಿತರಿಸಲಾಗಿದೆ; ಅಂತಹ ಎಷ್ಟು ಸುಳ್ಳು ಪ್ರಮಾಣ ಪತ್ರಗಳನ್ನು ಇಲ್ಲಿಯವರೆಗೆ ರದ್ದು ಪಡಿಸಲಾಗಿದೆ; | ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಮೀಸಲಾತಿ)ಆದೇಶ 2013ರ ನಿಯಮಗಳ ಪ್ರಕಾರ ಒಬ್ಬ ವ್ಯಕ್ತಿಯು ತಾನು ಸ್ಥಳೀಯ ವ್ಯಕ್ತಿ ಎಂದು ರುಜುವಾತುಪಡಿಸಲು ಕಂಡಿಕೆ 3(2)ರಲ್ಲಿ ನಿಗಧಿಪಡಿಸಿದ ಪ್ರಮಾಣ ಪತ್ರಗಳನ್ನು ಯುಕ್ತ ಪರಿಶೀಲನೆ ಹಾಗೂ ಸಂಕ್ಷಿಪ್ತ ವಿಚಾರಣೆ ಮಾಡಿ ಉಪವಿಭಾಗಾಧಿಕಾರಿಗಳು ಅನುಬಂಧ–ಎ ಪ್ರಮಾಣ ಪತ್ರವನ್ನು ಹಾಗೂ ಕಂಡಿಕೆ 4(ಬಿ) ಪ್ರಕಾರ ತಹಶೀಲ್ದಾರರು ಅನುಬಂಧ–ಬಿ ಪ್ರಮಾಣ ಪತ್ರವನ್ನು ವಿತರಿಸುತ್ತಾರೆ. ವಿತರಿಸಲಾದ ಅನುಬಂಧ–ಎ ಅರ್ಹತಾ ಪ್ರಮಾಣ ಪತ್ರದಲ್ಲಿ ದೂರುಗಳ ಆಧಾರದ ಮೇರೆಗೆ 10 ಅನುಬಂಧ–ಎ ಪ್ರಕರಣಗಳು ಸುಳ್ಳು ಇರುತ್ತವೆ ಎಂದು ದಾಖಲಾಗಿದ್ದು, ಅಂತಹ 4 ಸುಳ್ಳು ಪ್ರಮಾಣ ಪತ್ರಗಳನ್ನು ರದ್ದುಪಡಿಸಲಾಗಿದೆ.<br><br>ಅನುಬಂಧ–ಬಿ ರಡಿಯಲ್ಲಿ ಯಾವುದೇ ಸುಳ್ಳು ಪ್ರಮಾಣ ಪತ್ರವನ್ನು ವಿತರಿಸಿರುವುದರ ಬಗ್ಗೆ ದೂರು ದಾಖಲಾಗಿರುವುದಿಲ್ಲ. |

| | | |
|---|---|---|
| ಈ) | ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಇಲ್ಲಿಯವರೆಗೆ ಸಲ್ಲಿಸಲಾದ ಅರ್ಜಿಗಳು ಎಷ್ಟು; ಅವುಗಳಲ್ಲಿ ಎಷ್ಟು ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ; ಬಾಕಿ ಇರುವ ಅರ್ಜಿಗಳು ಎಷ್ಟು;(ತಾಲ್ಲೂಕುವಾರು ಮಾಹಿತಿ ನೀಡುವುದು) | ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಇಲ್ಲಿಯವರೆಗೆ ಸಲ್ಲಿಸಲಾದ ಅರ್ಜಿಗಳ ಸಂಖ್ಯೆ: 10. ಅವುಗಳಲ್ಲಿ 4 ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ. ಬಾಕಿಯಿರುವ ಅರ್ಜಿಗಳ ಸಂಖ್ಯೆ: 6.<br><br>**ತಾಲ್ಲೂಕುವಾರು ಮಾಹಿತಿ ಈ ಕೆಳಕಂಡಂತಿದೆ.** |

| ತಾಲ್ಲೂಕುಗಳ ಹೆಸರು | ಒಟ್ಟು ಸಲ್ಲಿಸಲಾದ ಅರ್ಜಿಗಳು | ವಿಲೇವಾರಿ ಮಾಡಲಾದ ಅರ್ಜಿಗಳು | ಬಾಕಿಯಿರುವ ಅರ್ಜಿಗಳು |
|---|---|---|---|
| ರಾಯಚೂರು | 01 | 00 | 01 |
| ಕಲಬುರಗಿ | 03 | 01 | 02 |
| ಅಫಜಲಪುರ | 01 | 00 | 01 |
| ಜೇವರ್ಗಿ | 01 | 00 | 01 |
| ಯಡ್ರಾಮಿ | 01 | 00 | 01 |
| ಸೇಡಂ | 01 | 01 | 00 |
| ಬೀದರ್ | 01 | 01 | 00 |
| ಯಲಬುರ್ಗಾ | 01 | 01 | 00 |
| **ಒಟ್ಟು** | **10** | **04** | **06** |

| | | |
|---|---|---|
| ಉ) | ಸುಳ್ಳು ಪ್ರಮಾಣ ಪತ್ರಗಳನ್ನು ವಿತರಿಸಿದ ಅಧಿಕಾರಿಗಳ ಮೇಲೆ ಯಾವ ಕ್ರಮ ಜರುಗಿಸಲಾಗಿದೆ; | ಸುಳ್ಳು ಪ್ರಮಾಣ ಪತ್ರಗಳನ್ನು ವಿತರಿಸಿದ ಅಧಿಕಾರಿಗಳ ಮೇಲೆ ಕ್ರಮ ಜರುಗಿಸುವಂತೆ ಇದುವರೆವಿಗೂ ಯಾವುದೇ ಪ್ರಸ್ತಾವನೆ ಸ್ವೀಕೃತಗೊಂಡಿರುವುದಿಲ್ಲ. ಪ್ರಸ್ತಾವನೆ ಸ್ವೀಕೃತಗೊಂಡಲ್ಲಿ ನಿಯಮಾನುಸಾರ ಕ್ರಮ ಜರುಗಿಸಲಾಗುವುದು. |
| ಊ) | ಸುಳ್ಳು ದಾಖಲೆ ನೀಡಿ 371–ಜೆ ಅರ್ಹತಾ ಪ್ರಮಾಣ ಪತ್ರಗಳನ್ನು ಪಡೆದಂತಹ ಅಭ್ಯರ್ಥಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಸುಳ್ಳು ದಾಖಲೆ ನೀಡಿ 371–ಜೆ ಅರ್ಹತಾ ಪ್ರಮಾಣ ಪತ್ರಗಳನ್ನು ಪಡೆದಂತಹ ಅಭ್ಯರ್ಥಿಗಳು ಕಂಡು ಬಂದಲ್ಲಿ ಸೂಕ್ತ ವಿಚಾರಣೆ ಕೈಗೊಂಡು ಅಂತಹ ಪ್ರಮಾಣ ಪತ್ರಗಳನ್ನು ರದ್ದುಪಡಿಸಿ ತಪ್ಪಿತಸ್ಥರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುತ್ತದೆ. |

**ಇ–ಕಂಇ 107 ಬಿಎಂಎಂ 2021**

(ಆರ್.ಅಶೋಕ)
ಕಂದಾಯ ಇಲಾಖೆ